# ಸತ್ಯ ವಿಶ್ವಾಸ

(ಭಾಗ-2)

4

ನಾಲ್ಕನೆಯ ತರಗತಿಗೆ

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಧಾರ್ಮಿಕ ಶಿಕ್ಷಣವು ಮಾನವ ಸಮೂಹಕ್ಕೆ ಮಾರ್ಗದರ್ಶಕವಾಗಿರಬೇಕು. ಹಾಗಾದರೆ ನಾಗರಿಕತೆಯ ಉದಾತ್ತ ಭಾವನೆಗಳನ್ನು ವೈಗೂಡಿಸಿ ಮಾನವನು ಜೀವನವನ್ನು ಸಫಲಗೊಳಿಸಬಹುದಾಗಿದೆ. ಈ ವಾಸ್ತವಿಕತೆಯನ್ನು ನಿರ್ಲಕ್ಷಿಸಿದರೆ ಮಾನವ ನಾಗರಿಕತೆ ವಿಫಲವಾದೀತು. ದುರಂತಮಯ ಪರಿಣಾಮಗಳಿಂದ ಮುಕ್ತರಾಗಲಿಕ್ಕಾಗಿ ಧಾರ್ಮಿಕ ಮೌಲ್ಯಗಳನ್ನು ಸಂರಕ್ಷಿಸಬೇಕಾದುದು ಜೀವಂತ ಸಮೂಹದ ಕರ್ತವ್ಯವಾಗಿದೆ. ಮಾತ್ರವಲ್ಲ ಅದು ಮಾನವ ಸಮೂಹಕ್ಕೆ ಸಲ್ಲಿಸಬಹುದಾದ ಮಹಾಸೇವೆಯೂ ಆಗಿದೆ.

ಅದನ್ನು ಸಾಧಿಸಬೇಕಿದ್ದರೆ ಧರ್ಮದ ಸರಿಯಾದ ತಿಳುವಳಿಕೆ ನೀಡಿ ಮೌಲ್ಯಗಳಲ್ಲಿ ನಿಷ್ಠೆಯಿರುವ ಸಮೂಹವನ್ನು ಕಟ್ಟಿ ಬೆಳೆಸಬೇಕು. ಪುಟ್ಟ ಮಕ್ಕಳಿಂದ ಆ ಕಾರ್ಯವನ್ನು ಆರಂಭಿಸಬೇಕು.

ಧಾರ್ಮಿಕ ಶಿಕ್ಷಣದಲ್ಲಿ ಸತ್ಯವಿಶ್ವಾಸದ ಪಾಠವನ್ನು ಅವಲಂಬಿಸಿದೆ. ಆದ್ದರಿಂದ, ಧಾರ್ಮಿಕ ಶಿಕ್ಷಣದ ಆರಂಭದಿಂದಲೇ ಅವುಗಳ ಸರಿಯಾದ ತಿಳುವಳಿಕೆಯಿರಬೇಕು.

ವಿಶ್ವಾಸ ಕಾರ್ಯಗಳೊಂದಿಗೆ ಕೆಲವು ಉಪವಿಷಯಗಳನ್ನೂ ಈ ಪುಸ್ತಕದಲ್ಲಿ ಸೇರಿಸ ಲಾಗಿದೆ. ಮೂರು ತರಗತಿಗಳಲ್ಲಿ ವಿಷಯವನ್ನು ಸಂಪೂರ್ಣವಾಗಿ ಕಲಿತು ಮುಗಿಸುವ ರೀತಿಯನ್ನು ಇಲ್ಲಿ ಬಳಸಲಾಗಿದೆ. ವಿಷಯಗಳ ವಿವರಣೆಯಲ್ಲಿ ಸ್ವಲ್ಪ ವೈಚಾರಿಕ ಧೋರಣೆ ಯನ್ನು ಅನುಸರಿಸಲಾಗಿದೆ. ವಿದ್ಯಾರ್ಥಿಗಳಿಗೆ ಅದನ್ನು ಗ್ರಹಿಸಲು ಕಷ್ಟವಾಗಲಾರದೆಂದು ನಿರೀಕ್ಷಿಸುತ್ತೇವೆ. ಮಕ್ಕಳಲ್ಲಿ ವಿಚಾರ ಶೀಲತೆಯನ್ನು ಬೆಳೆಸಲು ಅದು ಸಹಾಯಕವಾದೀತು.

ಕೇವಲ ಬಾಯಿ ಪಾಠ ಮಾಡುವುದರಿಂದ ವಿಶ್ವಾಸದ ಪೂರ್ಣ ಫಲ ದೊರೆಯಲಾರದು. ವಿದ್ಯಾರ್ಥಿಗಳಲ್ಲಿ ವಿಶ್ವಾಸದ ಸ್ಫೂರ್ತಿ ಬೆಳೆಸಲು ಅಧ್ಯಾಪಕರು ಪ್ರಯತ್ನಿಸಬೇಕು. ಪಾಠದ ಕೊನೆಯಲ್ಲಿ ಮಾದರೀ ಪ್ರಶ್ನೆಗಳನ್ನು ನೀಡಲಾಗಿದೆ. ಹೆಚ್ಚಿನ ಪ್ರಶ್ನೆಗಳನ್ನು ಅಧ್ಯಾಪಕರೇ ಸಿದ್ಧಪಡಿಸಬೇಕು. ಭಾಷೆ ಮತ್ತು ಪಾಠಗಳನ್ನು ಆದಷ್ಟು ಸರಳಗೊಳಿಸಲು ಪ್ರಯತ್ನಿಸಲಾಗಿದೆ. ಅಲ್ಲಾಹನು ಈ ಸೇವೆಯನ್ನು ಸತ್ಕರ್ಮವಾಗಿ ಅಂಗೀಕರಿಸಲಿ.

ಆಮೀನ್

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# 1

# ಅಲ್ಲಾಹ್

ಆರು ವಿಷಯಗಳಲ್ಲಿ ಕಡ್ಡಾಯವಾಗಿ ವಿಶ್ವಾಸವಿರಿಸಬೇಕು. ಆಗ ಮಾತ್ರ ಒಬ್ಬನು ಮುಸ್ಲಿಮನಾಗುತ್ತಾನೆ. ಇದನ್ನು ನಾವು ಈಗಾಗಲೇ ಕಲಿತಿದ್ದೇವೆ. ಅವುಗಳಲ್ಲಿ ಮೊದಲನೆಯದು, ಅಲ್ಲಾಹನಲ್ಲಿರುವ ವಿಶ್ವಾಸ. ಅಲ್ಲಾಹನು ಇದ್ದಾನೆ, ಆತನೇ ಎಲ್ಲವನ್ನೂ ಸೃಷ್ಟಿಸಿದ್ದಾನೆಂದು ವಿಶ್ವಾಸವಿರಿಸಬೇಕು. ಆತನು ಏಕನು ಮತ್ತು ಆತನು ಮಾತ್ರ 'ಇಬಾದತ್'ಗೆ ಅರ್ಹನೆಂದೂ ವಿಶ್ವಾಸವಿರಿಸಬೇಕು. ಹಾಗಾದರೆ ಮಾತ್ರ ಅಲ್ಲಾಹನಲ್ಲಿರುವ ವಿಶ್ವಾಸ ಪೂರ್ಣವಾಗುತ್ತದೆ.

ಪ್ರಥಮ ಮಾನವ ಆದಮ್(ಅ) ಏಕದೇವ ವಿಶ್ವಾಸಿಯಾಗಿದ್ದರು. ಅವರು ಕೇವಲ ಏಕನಾದ ಅಲ್ಲಾಹನನ್ನು ಆರಾಧಿಸಿದರು. ಆತನನ್ನು ಮಾತ್ರ ಅನುಸರಿಸುತ್ತಾ ಬಾಳಿದರು. ಪ್ರವಾದಿ ಆದಮ್(ಅ) ಅವರ ಪೀಳಿಗೆಯವರೂ ಆ ಮಾರ್ಗವನ್ನೇ ಅವಲಂಬಿಸಿದರು. ಹಲವು ಯುಗಗಳು ಕಳೆದು ಹೋದುವು. ಜನರು ಅವರ ಬೋಧನೆಗಳನ್ನು ಮರೆಯಲಾರಂಭಿಸಿದರು. ಹಲವು ರೀತಿಯ ದೇವವಿಶ್ವಾಸಗಳು ಅವರಲ್ಲಿ ಬೆಳೆದುವು.

ಹಲವರು ವಸ್ತುಗಳನ್ನು ದೇವರೆಂದು ಭಾವಿಸಿದರು. ಕೆಲವರು ಸೂರ್ಯನನ್ನು, ಕೆಲವರು ಚಂದ್ರನನ್ನು, ಕೆಲವರು ಗಾಳಿ–ಬೆಂಕಿ, ಮಳೆ ಎಂಬಿತ್ಯಾದಿ ವಸ್ತುಗಳನ್ನು ದೇವರೆಂದು ಭಾವಿಸಿದರು. ಜಗತ್ತಿನಲ್ಲಿ ನಡೆಯುವ ಪ್ರತಿಯೊಂದು ಕ್ರಿಯೆಗೂ ಪ್ರತ್ಯೇಕ ದೇವರಿರುವರೆಂದೂ ಕೆಲವರು ನಂಬಿದರು. ಗಾಳಿ ಬೀಸುವ ದೇವ, ಮಳೆ ಸುರಿಸುವ ದೇವ ಇತ್ಯಾದಿ. ಗತಿಸಿದ ಮಹಾಪುರುಷರನ್ನೂ ಕೆಲವರು ದೇವರೆಂದು ಪರಿಗಣಿಸಿದರು.

ಈ ವಸ್ತುಗಳನ್ನು ಮತ್ತು ವ್ಯಕ್ತಿಗಳನ್ನು ಜನರು ದೇವರೆಂದು ಭಾವಿಸಿ ಪೂಜಿಸಿದರು. ಅವರೊಡನೆ ಪ್ರಾರ್ಥಿಸಿ ಸಹಾಯ ಯಾಚಿಸಿದರು. ಅವರಿಗೆ ಹರಕೆ ಕಾಣಿಕೆಗಳನ್ನು ಸಲ್ಲಿಸಿದರು. ಅವರೆಲ್ಲರೂ ಮಾನವರಿಗೆ ಉಪಕಾರ ಮತ್ತು ಹಾನಿ ಮಾಡುವರೆಂದು ಜನರು ನಂಬಿದ್ದರು. ಬಿರುಗಾಳಿ ಬೀಸಿ ನಾಶ–ನಷ್ಟವುಂಟಾಗುತ್ತದೆ. ಮಳೆ ಸುರಿದು ನೆರೆ ಬರುತ್ತದೆ.

ಅಗ್ನಿಗಾಹುತಿಯಾಗಿ ಎಲ್ಲವೂ ನಾಶವಾಗುತ್ತದೆ. ಇವನ್ನೆಲ್ಲಾ ಕಂಡು ಅವರು ಹಾಗೆ ವಿಶ್ವಾಸ ತಾಳಿದ್ದರು.

ಆದರೆ, ಇವುಗಳಲ್ಲಿ ಯಾವುದೂ ದೇವರಲ್ಲ, ಅವು ಕೇವಲ ಅಲ್ಲಾಹನ ಸೃಷ್ಟಿಗಳು. ಮಾನವರಿಗೆ ಸ್ವಯಂ ಉಪಕಾರ ಅಥವಾ ಹಾನಿ ಮಾಡಲು ಅವುಗಳಿಗೆ ಸಾಧ್ಯವಿಲ್ಲ, ಅದು ಅಲ್ಲಾಹನಿಗೆ ಮಾತ್ರ ಸಾಧ್ಯ.

ಅವುಗಳನ್ನು ದೇವರೆಂದು ಭಾವಿಸಿದರೆ ಅವುಗಳನ್ನು ಅಲ್ಲಾಹನ ಜೊತೆಗಾರರಾಗಿ ಮಾಡಿದಂತಾಗುವುದು. ಅದನ್ನು 'ಶಿರ್ಕ್' ಎನ್ನಲಾಗುತ್ತದೆ. ಶಿರ್ಕ್ ಘೋರ ಪಾಪ. ಮಹಾ ಅಪರಾಧ. ಅಲ್ಲಾಹನ ಸ್ಥಾನವನ್ನು ಆತನ ಸೃಷ್ಟಿಗಳಿಗೆ ನೀಡುವುದು ಮಹಾ ಅನ್ಯಾಯ. ಅದನ್ನು ಆತ ಎಂದೂ ಕ್ಷಮಿಸುವುದಿಲ್ಲ.

ಶಿರ್ಕ್, ಮಾನವರ ಅಜ್ಞಾನದಿಂದ ಹುಟ್ಟಿಕೊಂಡಿದೆ. ಈ ಅಜ್ಞಾನದ ನಿವಾರಣೆಗಾಗಿ ಅಲ್ಲಾಹನು ಕಾಲ ಕಾಲಕ್ಕೆ ಪ್ರವಾದಿಗಳನ್ನು ಕಳುಹಿಸಿದ್ದನು. ಅವರು ಜನರಿಗೆ ಸರಿಯಾದ ದೇವವಿಶ್ವಾಸವನ್ನು ಕಲಿಸಿದರು. ಅಲ್ಲಾಹನು ಏಕನು, ಕೇವಲ ಆತನೊಬ್ಬನನ್ನೇ ಆರಾಧಿಸಬೇಕು. ಕೇವಲ ಆತನಿಗೆ ವಿಧೇಯರಾಗಬೇಕು, ಮಾನವರಿಗೆ ಉಪಕಾರ ಅಥವಾ ಹಾನಿ ಮಾಡಲು ಆತನಿಂದ ಮಾತ್ರ ಸಾಧ್ಯವೆಂಬುದನ್ನು ಅವರು ಜನರಿಗೆ ಕಲಿಸಿದರು.

ಹಾಗಾದರೆ ದೇವನು ಒಬ್ಬನೇ, ಅಲ್ಲಾಹ್ ಮಾತ್ರ. ತನ್ನ ಎಲ್ಲ ಗುಣಗಳಲ್ಲಿಯೂ ಅಲ್ಲಾಹನು ಏಕನು. ಅಧಿಕಾರ ಮತ್ತು ಹಕ್ಕುಗಳಲ್ಲಿಯೂ ಆತ ಏಕನಾಗಿದ್ದಾನೆ. ಆತನಿಗೆ ಕುಟುಂಬ ಅಥವಾ ಸಂಗಡಿಗರಿಲ್ಲ, ಇದುವೇ ನಿಜವಾದ ಏಕದೇವ ವಿಶ್ವಾಸ. ನಮ್ಮ ಜೀವನವು ಈ ವಿಶ್ವಾಸಕ್ಕೆ ಅನುಗುಣವಾಗಿರಬೇಕು.

## ಅಭ್ಯಾಸ

1. ಅಲ್ಲಾಹನ ಬಗ್ಗೆ ಯಾವ ರೀತಿಯ ವಿಶ್ವಾಸಗಳನ್ನಿರಿಸಬೇಕು?
2. ಪ್ರವಾದಿ ಆದಮ್'ರ(ಅ) ಬಳಿಕ ಜನರ ವಿಶ್ವಾಸಗಳಲ್ಲಿ ಆದ ಬದಲಾವಣೆಗಳು ಯಾವುವು?
3. 'ಶಿರ್ಕ್' ಎಂದರೇನು?



# 2

# ದೇವವಿಶ್ವಾಸದ ಫಲಗಳು

ದ್ವಿತೀಯ ಖಲೀಫ ಉಮರ್‌ರ(ರ) ಆಡಳಿತ ಕಾಲ. ಅವರು ಸಾಮಾನ್ಯವಾಗಿ ರಾತ್ರಿ ಕಾಲಗಳಲ್ಲಿ ವೇಷ ಬದಲಾಯಿಸಿ ಸಂಚರಿಸುತ್ತಿದ್ದರು. ಹೀಗೆ ನಡೆಯುತ್ತಾ ಒಮ್ಮೆ ಅವರು ಒಂದು ಗುಡಿಸಲಿನ ಬಳಿಗೆ ತಲಪಿದರು. ಒಳಗಿನಿಂದ ಶಬ್ದ ಕೇಳಿಸಿತು. ತಾಯಿ ಮತ್ತು ಮಗಳು ಮಾತಾಡುತ್ತಿದ್ದಾರೆ. ಅವರು ಅದನ್ನು ಆಲಿಸಿದರು.

"ಮಗಳೇ, ಹಾಲಿಗೆ ಸ್ವಲ್ಪ ನೀರು ಬೆರೆಸು" ಮಾರುವ ಹಾಲಿಗೆ ನೀರು ಸೇರಿಸುವಂತೆ ತಾಯಿ ಹೇಳುತ್ತಿದ್ದಾಳೆ.

"ಅಮ್ಮಾ... ಹಾಗೆ ಮಾಡಬಾರದು! ಇದು ಮೋಸ. ಉಮರ್‌ರ(ರ) ಕಾನೂನು ನಿಮಗೆ ತಿಳಿದಿಲ್ಲವೇ? ಮಗಳು ಉತ್ತರಿಸುತ್ತಾಳೆ.

"ಮಗಳೇ, ಉಮರ್‌ರಿಗೆ(ರ) ಇದು ಕಾಣುವುದಿಲ್ಲವಲ್ಲಾ" ತಾಯಿ ಪುನಃ ಒತ್ತಾಯಿಸಿದಳು.

"ನಿಜ, ಉಮರ್‌ರಿಗೆ(ರ) ಕಾಣಿಸುವುದಿಲ್ಲ, ಆದರೆ ಅಲ್ಲಾಹನಿಗೆ ಕಾಣಿಸುವು ದಿಲ್ಲವೇ?"

ಮಗಳ ಉತ್ತರ ಕೇಳಿ ಉಮರ್‌ರಿಗೆ(ರ) ತುಂಬಾ ಸಂತೋಷವಾಯಿತು.

ನೋಡಿದಿರಾ, ಆ ಹುಡುಗಿಯ ದೇವವಿಶ್ವಾಸ! ತನ್ನ ತಾಯಿಯೇ ಮೋಸ ಮಾಡಲು ಹೇಳುತ್ತಿದ್ದಾಳೆ. ಆದರೆ ಅಲ್ಲಾಹನು ನೋಡುವನೆಂಬ ಕಾರಣದಿಂದ ಆಕೆ ಹಾಗೆ ಮಾಡುವುದಿಲ್ಲ, ಇದುವೇ ದೇವವಿಶ್ವಾಸದ ಫಲ. ಅಲ್ಲಾಹನಲ್ಲಿ ವಿಶ್ವಾಸ ವಿರಿಸುವವರು ಮೋಸ ಮಾಡುವುದಿಲ್ಲ, ಎಲ್ಲ ಕ್ರಿಯೆಗಳನ್ನೂ ಅಲ್ಲಾಹನು ನೋಡುತ್ತಾನೆ. ಆ ಬಗ್ಗೆ ಅಲ್ಲಾಹನು ವಿಚಾರಣೆ ಮಾಡಲಿದ್ದಾನೆ. ಈ ಪ್ರಜ್ಞೆಯು ದೇವವಿಶ್ವಾಸಿಯಲ್ಲಿ ಸದಾ ಇರುತ್ತದೆ. ಇದು ಆತನ ವರ್ತನೆಗಳನ್ನು ಉತ್ತಮಗೊಳಿಸುತ್ತದೆ. ಇದರಿಂದಾಗಿ ಗುಪ್ತವಾಗಿಯೂ ತಪ್ಪು ಮಾಡಲು ಆತನಿಗೆ ಸಾಧ್ಯವಾಗುವುದಿಲ್ಲ.

ಇನ್ನೊಂದು ಘಟನೆ. ಅದು ಪ್ರವಾದಿ(ಸ) ಅವರ ಕಾಲದಲ್ಲಿ ನಡೆದದ್ದು. ಪ್ರವಾದಿಯವರು(ಸ) ಹೊರದೇಶಗಳ ರಾಜಂದಿರನ್ನು ಇಸ್ಲಾಮಿಗೆ ಆಹ್ವಾನಿಸಿ ಪತ್ರ

ಬರೆಯುತ್ತಿದ್ದರು. ಆ ಪೈಕಿ ಪರ್ಶಿಯನ್ ರಾಜ 'ಕಿಸ್ರಾ'ರಿಗೂ ಪ್ರವಾದಿಯವರು(ಸ) ಪತ್ರ ಬರೆದಿದ್ದರು. ಅಬ್ದುಲ್ಲಾ ಬಿನ್ ಹುದಾಫ(ರ) ಎಂಬ ಸಹಾಬಿಯವರ ಮೂಲಕ ಆ ಪತ್ರವನ್ನು ಕಳುಹಿಸಿದ್ದರು.

ಅಬ್ದುಲ್ಲಾ(ರ) ಓರ್ವ ಹಳ್ಳಿಗ. ದೊರಗು ಬಟ್ಟೆಗಳನ್ನು ಉಟ್ಟಿದ್ದರು. ಒಬ್ಬ ಮಹಾರಾಜನ ಬಳಿಗೆ ಈ ಉಡುಪಿನಲ್ಲಿ ಹೋಗಬೇಕಾಗಿದೆ. ಆದರೂ ಅವರು ಅದನ್ನು ಲೆಕ್ಕಿಸದೆ ಒಂದು ಚರ್ಮದ ಚೀಲವನ್ನು ಹೆಗಲಿಗೇರಿಸಿ ಹೊರಟರು.

ಅಬ್ದುಲ್ಲಾ(ರ) ರಾಜರ ಅರಮನೆಗೆ ತಲಪಿದಗು. ಅನುಮತಿ ಪಡೆದು ರಾಜದರ್ಬಾರಿಗೆ ಹೋದರು. ಅವರು ಪ್ರಯಾಣದಿಂದ ತುಂಬಾ ಬಳಲಿದ್ದರು. ಆದರೂ ಅವರು ತಲೆಯೆತ್ತಿ ಗಂಭೀರವಾಗಿ ನಡೆದು ಬರುತ್ತಿದ್ದರು. ಹಳೆಯ ಉಡುಪು ಧರಿಸಿದ ಒಬ್ಬರು ತನ್ನ ಬಳಿಗೆ ಬರುತ್ತಿದ್ದಾರೆ. ಚಕ್ರವರ್ತಿ ಗಮನಿಸಿದರು. ಅಬ್ದುಲ್ಲಾ ಬಿನ್ ಹುದಾಫ(ರ) ತನ್ನ ಬಳಿ ಬರುವುದಕ್ಕಿಂತ ಮುಂಚೆಯೇ ಪತ್ರವನ್ನು ತೆಗೆದುಕೊಳ್ಳಲು ಒಬ್ಬರನ್ನು ಕಳುಹಿಸಿದರು. ಇದನ್ನು ನೋಡಿ ಅವರು ಹೇಳಿದರು: "ಅಲ್ಲಾಹನಾಣೆ! ನಾನು ಇದನ್ನು ರಾಜನ ಕೈಯಲ್ಲಿ ಮಾತ್ರ ನೀಡುತ್ತೇನೆ. ಇದು ಪ್ರವಾದಿಯವರ(ಸ) ಆಜ್ಞೆ. ಆ ಆಜ್ಞೆಯನ್ನು ಪಾಲಿಸದೆ ನಾನು ಹೋಗುವುದಿಲ್ಲ." ಕೊನೆಗೆ ರಾಜನ ಕೈಗೆ ಅವರು ಆ ಪತ್ರವನ್ನು ಒಪ್ಪಿಸಿದರು.

ಎಂತಹ ಆತ್ಮವಿಶ್ವಾಸ! ಇದು ಅಲ್ಲಾಹನ ವಿಶ್ವಾಸದಿಂದಲೇ ಮೂಡಿ ಬಂದಿದೆ. ಚಕ್ರವರ್ತಿಯು ಪ್ರತಾಪಶಾಲಿ ನಿಜ. ಆದರೆ ಅಲ್ಲಾಹನೇ ಮಹಾ ಪ್ರತಾಪಶಾಲಿಯೆಂದು ಅವರು ನಂಬಿದ್ದರು. ಆ ಪ್ರತಾಪದ ಮುಂದೆ ಇತರೆಲ್ಲವೂ ಗೌಣ. ಇದು ದೇವವಿಶ್ವಾಸದ ಇನ್ನೊಂದು ಫಲ. ದರಿದ್ರನಾದರೂ ಸತ್ಯವಿಶ್ವಾಸಿಗೆ ಸ್ವಾಭಿಮಾನವಿರುತ್ತದೆ. ಎಂತಹ ಪ್ರತಾಪಶಾಲಿಯ ಮುಂದೆಯೂ ಆತ ತಲೆಯೆತ್ತಿ ನಿಲ್ಲುತ್ತಾನೆ.

ದೇವವಿಶ್ವಾಸದಿಂದ, ಸ್ವಾಭಿಮಾನದೊಂದಿಗೆ ವಿನಯ ಮತ್ತು ಪ್ರೀತಿಯೂ ಮೂಡುತ್ತದೆ. ಒಮ್ಮೆ ಉಮರ್(ರ) ನಡೆದು ಹೋಗುತ್ತಿದ್ದರು. ದಾರಿ ಬದಿಯ ಒಂದು ತೋಟದಲ್ಲಿ ಕೆಲವು ಮಕ್ಕಳು ಖರ್ಜೂರ ಹೆಕ್ಕುತ್ತಿದ್ದರು. ಉಮರ್‌ರನ್ನು(ರ) ನೋಡಿದಾಗ ಒಬ್ಬನ ಹೊರತು ಇತರೆಲ್ಲ ಮಕ್ಕಳು ಓಡಿ ಅಡಗಿಕೊಂಡರು. ಅವರು ಆ ಬಾಲಕನ ಬಳಿಗೆ ಹೋದರು. ಅವರು ಏನಾದರೂ ವಿಚಾರಿಸುವುದಕ್ಕಿಂತ ಮೊದಲೇ ಆತ ಹೇಳಿದ: "ಇವು ಗಾಳಿಗೆ ಬಿದ್ದ ಖರ್ಜೂರಗಳು. ನಾವು ಅದನ್ನು ಹೆಕ್ಕುತ್ತಿದ್ದೇವೆ." ಅವರು ಖರ್ಜೂರವನ್ನು ತೆಗೆದು ನೋಡಿದರು. ನಿಜ, "ಚಿಂತಿಲ್ಲ, ನೀನೇ ತೆಗೆದುಕೋ." ಹೀಗೆ ಹೇಳಿ ಉಮರ್(ರ) ಅಲ್ಲಿಂದ ಹೊರಟರು. ಬಾಲಕ ಪುನಃ ಹೇಳಿದ "ಓಡಿ ಹೋದ ಮಕ್ಕಳು ನಾನು ಹೆಕ್ಕಿದ

ಖರ್ಜೂರವನ್ನು ಕಸಿದುಕೊಳ್ಳಬಹುದು."

ಉಮರ್‌ರಿಗೆ(ರ) ನಗು ಬಂತು. ಆವರು ಹೇಳಿದರು: "ಹೆದರಬೇಡ, ನಾನು ನಿನ್ನನ್ನು ಮನೆಗೆ ತಲಪಿಸುತ್ತೇನೆ" ಅವರು ಬಾಲಕನನ್ನು ಮನೆಗೆ ತಲಪಿಸಿದರು.

ಆಡಳಿತಗಾರರಾಗಿದ್ದ ಉಮರ್‌ರು(ರ) ಬಾಲಕನಿಂದ ಇತರರು ಖರ್ಜೂರ ವನ್ನು ಕಸಿಯದಿರಲಿಕ್ಕಾಗಿ ಆತನನ್ನು ಮನೆಗೆ ತಲುಪಿಸಿದ್ದರು.

ಅಧಿಕಾರ ಮತ್ತು ಶಕ್ತಿಯಿರುವಂತಹ ಆಡಳಿತಗಾರ. ಆದರೂ ಎಂತಹ ವಿನಯ! ಎಂತಹ ಪ್ರೀತಿ!

ಉಮರ್‌ರ(ರ) ವಿಶ್ವಾಸವೇ ಅದಕ್ಕೆ ಕಾರಣವಾಗಿತ್ತು. ಶಕ್ತಿ ಮತ್ತು ಅಧಿಕಾರ ಗಳೆಲ್ಲವೂ ಅಲ್ಲಾಹನಿಗೆ. ಆತನು ಬಯಸಿದವರಿಗೆ ಅದನ್ನು ನೀಡುತ್ತಾನೆ. ಕೆಲ ನಿಮಿಷಗಳಲ್ಲಿಯೇ ಅದನ್ನು ಹಿಂತೆಗೆದುಕೊಳ್ಳಲೂ ಆತನಿಗೆ ಸಾಧ್ಯವಿದೆ. ಆದ್ದರಿಂದ ಸಾಮರ್ಥ್ಯಗಳಿಗಾಗಿ ಅಹಂಕಾರ ಪಡಬಾರದು. ಸಹನೆ ಮತ್ತು ವಿನಯವಿರಬೇಕು. ಆದುವೇ ದೇವ ವಿಶ್ವಾಸದ ಫಲ.

## ಅಭ್ಯಾಸ

1. ದೇವವಿಶ್ವಾಸದ ಕೆಲವು ಸತ್ಫಲಗಳನ್ನು ತಿಳಿಸಿರಿ.
2. ಪ್ರವಾದಿ(ಸ) ಕಿಸ್ರಾನಿಗೆ ಯಾರ ಮೂಲಕ ಪತ್ರ ಕಳುಹಿಸಿದ್ದರು?
3. ಸತ್ಯವಿಶ್ವಾಸಿಯು ಸ್ವಾಭಿಮಾನಿಯಾಗಿರುತ್ತಾನೆ. ಯಾಕೆ?
4. ಸಂದರ್ಭ ಕೊಟ್ಟು ವಿವರಿಸಿ:
   "ಇವು ಗಾಳಿಗೆ ಬಿದ್ದ ಖರ್ಜೂರಗಳು
5. ಬಿಟ್ಟ ಪದ ತುಂಬಿಸಿ
   ಶಕ್ತಿ ಮತ್ತು ಅಧಿಕಾರಗಳೆಲ್ಲವೂ ____________



# 3

# ದೇವಚರರು

ದೇವಚರರ ಮೇಲಿನ ವಿಶ್ವಾಸವು ಎರಡನೆಯ ವಿಷಯವಾಗಿದೆ. ಮುಸ್ಲಿಮನಾಗಲು ಈ ವಿಶ್ವಾಸ ಅತ್ಯವಶ್ಯಕ. ಅಲ್ಲಾಹ್ ಮತ್ತು ಪ್ರವಾದಿಯವರ ಮೇಲಿನ ವಿಶ್ವಾಸವು ಪೂರ್ಣವಾಗಬೇಕಿದ್ದರೆ ದೇವಚರರಲ್ಲಿಯೂ ವಿಶ್ವಾಸವಿರಿಸಬೇಕು.

ಅಲ್ಲಾಹನು ಪ್ರವಾದಿಗಳಿಗೆ ದೇವಚರರ ಮೂಲಕ ಆದೇಶಗಳನ್ನು ನೀಡಿದ್ದಾನೆ. ಅದಕ್ಕಾಗಿ ಅಲ್ಲಾಹನು ಜಿಬ್ರೀಲ್(ಅ) ಎಂಬ ದೇವಚರರನ್ನು ನೇಮಿಸಿದ್ದನು. ಆದ್ದರಿಂದ ದೇವಚರರನ್ನು ನಿರಾಕರಿಸಬಾರದು. ಏಕೆಂದರೆ, ಅದು ಪ್ರವಾದಿಗಳಿಗೆ ದೇವಾದೇಶ ತಲುಪಿದ ಮಾರ್ಗದ ನಿರಾಕರಣೆಯಾಗುತ್ತದೆ. ಅದರಿಂದಾಗಿ ಪ್ರವಾದಿಗಳ ಮಾತು ಸುಳ್ಳೆನಿಸಬಹುದು. ಆದ್ದರಿಂದ ದೇವಚರರಲ್ಲಿ ಕಡ್ಡಾಯವಾಗಿ ವಿಶ್ವಾಸವಿರಿಸಬೇಕು.

ದೇವಚರರೂ ಅಲ್ಲಾಹನ ಸೃಷ್ಟಿಗಳಾಗಿದ್ದಾರೆ. ಅವರು ಆತನ ಅಧಿಕಾರದಲ್ಲಿ ಪಾಲುದಾರರಲ್ಲ. ದೇವಚರರನ್ನು ಕೆಲವರು ತಪ್ಪಾಗಿ ದೇವತೆಗಳೆಂದು ತಿಳಿಯುತ್ತಾರೆ. ಅದು ಶಿರ್ಕ್ ಆಗಿದೆ. ದೇವಚರರು ಮಾನವರಿಗೆ ಕಾಣಿಸುವುದಿಲ್ಲ. ಅಲ್ಲಾಹನು ಬಯಸಿದರೆ ಅವರನ್ನು ಮಾನವ ರೂಪದಲ್ಲಿ ತೋರಿಸಬಹುದು. ಅದರೊಂದಿಗೆ ಅವರು ಅಲ್ಲಾಹನು ವಹಿಸಿಕೊಟ್ಟ ಅನೇಕ ಕೆಲಸಗಳನ್ನು ನಿರ್ವಹಿಸುತ್ತಾರೆ. ಆದ್ದರಿಂದ ಅವರನ್ನು ದೇವತೆಗಳೆಂದು ಭ್ರಮಿಸಲಾಯಿತು.

ದೇವಚರರು ಅಲ್ಲಾಹನ ಆಜ್ಞೆಯನ್ನು ಮಾತ್ರ ಪಾಲಿಸುತ್ತಾರೆ. ಅವರಿಗೆ ಸ್ವಯಂ ಏನೂ ಮಾಡಲಾಗುವುದಿಲ್ಲ. ಆದ್ದರಿಂದಲೇ ಅವರು ದೇವರಲ್ಲ.

ಅಲ್ಲಾಹನು ದೇವಚರರೊಡನೆ ಆದಮ್‌ರಿಗೆ(ಅ) ಸಾಷ್ಟಾಂಗವೆರಗುವಂತೆ ಆದೇಶಿಸಿದ್ದನು. ಅವರು ಕೇವಲ ಸೃಷ್ಟಿಗಳಾಗಿರುವುದರಿಂದಲೇ ಹಾಗೆ ಮಾಡಿಸಿದನು.

ದೇವಚರರು ಅಲ್ಲಾಹನ ಪುತ್ರಿಯರೆಂದು ಕೆಲವರು ನಂಬಿದರು. ಆ ವಿಶ್ವಾಸವೂ

ತಪ್ಪು, ಅಲ್ಲಾಹನಿಗೆ ಸಂತಾನಗಳಿಲ್ಲ, ಆದ್ದರಿಂದ ದೇವಚರರು ಅಲ್ಲಾಹನ ಸಂತಾನಗಳಲ್ಲ, ಅವರು ಕೇವಲ ಆತನ ದಾಸರು.

ದೇವಚರರು ಅಲ್ಲಾಹನ ವಿಶೇಷ ರೀತಿಯ ಸೃಷ್ಟಿಗಳಾಗಿದ್ದಾರೆ. ಅವರನ್ನು ಮಾನವರಂತೆ ಗಂಡೋ ಹೆಣ್ಣೋ ಎಂದು ಹೇಳುವಂತಿಲ್ಲ, ಅವರಿಗೆ ನಿದ್ದೆ ಅಥವಾ ಆಹಾರದ ಅಗತ್ಯವಿಲ್ಲ,

ದೇವಚರರು ಬಹಳ ಶ್ರೇಷ್ಠರೂ ಪರಿಶುದ್ಧರೂ ಆಗಿದ್ದಾರೆ. ಅವರು ಸದಾ ಅಲ್ಲಾಹನನ್ನು ಆರಾಧಿಸುತ್ತಿರುತ್ತಾರೆ. ಆತನ ಆಜ್ಞೆಗಳನ್ನು ಪಾಲಿಸುವುದಲ್ಲದೆ ತಪ್ಪು ಮಾಡಲು ಅವರಿಗೆ ಸಾಧ್ಯವಿಲ್ಲ,

ದೇವಚರರಲ್ಲಿರುವ ವಿಶ್ವಾಸವು ಪರೋಕ್ಷ(ಗೈಬ್)ದ ವಿಶ್ವಾಸವಾಗಿದೆ. ಅಗೋಚರಗಳಲ್ಲಿರುವ ವಿಶ್ವಾಸ. ಅಲ್ಲಾಹನಿಗೆ ನಮಗೆ ಗೋಚರಿಸದ ಎಷ್ಟೋ ಸೃಷ್ಟಿಗಳೂ ಕ್ರಿಯೆಗಳೂ ಇವೆ. ಆದ್ದರಿಂದ ದೇವಚರರಲ್ಲಿರುವ ವಿಶ್ವಾಸವು ಅಲ್ಲಾಹನಲ್ಲಿರುವ ವಿಶ್ವಾಸಕ್ಕೆ ಪೂರಕವಾಗಿದೆ.

## ಅಭ್ಯಾಸ

1. ದೇವಚರರನ್ನು ನಿರಾಕರಿಸಬಾರದೇಕೆ?
2. ದೇವಚರರು ಅಲ್ಲಾಹನ....................ಗಳು.
3. ದೇವಚರರು ಮತ್ತು ಮಾನವರ ಕೆಲವು ವ್ಯತ್ಯಾಸಗಳನ್ನು ತಿಳಿಸಿರಿ.
4. ದೇವಚರರಲ್ಲಿರುವ ವಿಶ್ವಾಸವು................ದ ವಿಶ್ವಾಸವಾಗಿದೆ.



# 4

# ದೇವಗ್ರಂಥಗಳು

ಅಲ್ಲಾಹನ ಗ್ರಂಥಗಳಲ್ಲಿರುವ ವಿಶ್ವಾಸವು, ಮೂರನೆಯ ವಿಷಯವಾಗಿದೆ. ಇಲ್ಲಿ ಮಾನವ ಸ್ವೇಚ್ಛೆಯಿಂದ ಬಾಳಬಾರದು. ಅಲ್ಲಾಹನ ಆಜ್ಞಾನುಸಾರಿಗಳಾಗಿಯೇ ಬಾಳಬೇಕು. ಆದರೆ ಆತನ ಆಜ್ಞೆಗಳನ್ನು ನಮಗೆ ಸ್ವಯಂ ಕಂಡು ಹಿಡಿಯಲಾಗುವುದಿಲ್ಲ, ಆದ್ದರಿಂದ ಅಲ್ಲಾಹನೇ ಅವುಗಳನ್ನು ತಿಳಿಸಿದ್ದಾನೆ. ಎಲ್ಲ ಕಾಲಗಳಲ್ಲಿಯೂ ಮಾನವರ ಜೀವನಕ್ಕೆ ಅಗತ್ಯವಿರುವ ನಿಯಮಗಳನ್ನು ಆತನು ನೀಡಿದ್ದಾನೆ. ಅಲ್ಲಾಹನ ಗ್ರಂಥಗಳಲ್ಲಿ ಆ ನಿಯಮಗಳಿವೆ.

ಎಲ್ಲ ದೇವಗ್ರಂಥಗಳೂ ಅಲ್ಲಾಹನ ವಚನಗಳಾಗಿವೆ. ಅವುಗಳನ್ನು ದೇವಚರರ ಮೂಲಕ ಪ್ರವಾದಿಗಳಿಗೆ ತಲುಪಿಸಲಾಯಿತು. ಪ್ರವಾದಿಗಳು ಅದನ್ನು ಜನರಿಗೆ ಕಲಿಸಿದರು. ಅವರು ತಮ್ಮ ಕಡೆಯಿಂದ ಏನನ್ನೂ ಅದರಲ್ಲಿ ಸೇರಿಸಲಿಲ್ಲ, ಯಾವುದನ್ನೂ ಅದರಿಂದ ತೆಗೆಯಲಿಲ್ಲ.

ಎಲ್ಲ ಗ್ರಂಥಗಳೂ ಒಂದೇ ಉದ್ದೇಶಕ್ಕಾಗಿ ಅವತೀರ್ಣಗೊಂಡಿದ್ದುವು. ಜನರಿಗೆ ಇಸ್ಲಾಮ್ ಧರ್ಮವನ್ನು ಕಲಿಸಲಿಕ್ಕಾಗಿ.

ಆದರೆ ಗ್ರಂಥಗಳು ವಿವಿಧ ಕಾಲಗಳಲ್ಲಿ ಅವತೀರ್ಣಗೊಂಡಿವೆ. ಆದ್ದರಿಂದ ನಿಯಮಗಳಲ್ಲಿಯೂ ಕೆಲವು ಬದಲಾವಣೆಗಳನ್ನು ಮಾಡಬೇಕಾಯಿತು. ಆಯಾ ಕಾಲಕ್ಕೆ ಬೇಕಾದ ನಿಯಮಗಳನ್ನು ನೀಡಬೇಕಾದ ಅಗತ್ಯವಿದೆ. ಪ್ರವಾದಿ ಆದಮ್‌ರ(ಅ) ಕಾಲದಲ್ಲಿ ನೀಡಿದ ಆದೇಶಗಳು ಅನಂತರದ ಜನತೆಗೆ ಸಾಕಾಗಲಾರವು. ಜನರ ಸಂಖ್ಯೆ ಹೆಚ್ಚುತ್ತದೆ. ಬೇಡಿಕೆಗಳು ಏರುತ್ತವೆ. ಹಲವು ಹೊಸ ವಿಷಯಗಳನ್ನು ತಿಳಿಯಬೇಕಾಗುತ್ತದೆ. ಆದ್ದರಿಂದ ಅವರಿಗೆ ಹೊಸ ಆದೇಶಗಳು ಅವಶ್ಯಕವಾಗುತ್ತವೆ. ಆದರೆ ಮೂಲ ವಿಷಯ ಎಲ್ಲ ಕಾಲಗಳಲ್ಲಿಯೂ ಒಂದೇ ಆಗಿತ್ತು.

ಹೀಗೆ ಅಲ್ಲಾಹನು ಹಲವು ಗ್ರಂಥಗಳನ್ನು ನೀಡಿದ್ದಾನೆ. ಕೊನೆಯ ಗ್ರಂಥವೇ ಪವಿತ್ರ ಕುರ್‌ಆನ್, ಒಟ್ಟು ಎಷ್ಟು ಗ್ರಂಥಗಳು ಅವತೀರ್ಣಗೊಂಡಿವೆಯೆಂದು ಅಲ್ಲಾಹನು ನಮಗೆ

ಸ್ಪಷ್ಟವಾಗಿ ತಿಳಿಸಿಲ್ಲ, ನಾಲ್ಕು ಗ್ರಂಥಗಳ ಬಗ್ಗೆ ಮಾತ್ರ ನಮಗೆ ತಿಳಿದಿದೆ. ಪ್ರವಾದಿ ಮೂಸಾರಿಗೆ(ಅ) ನೀಡಿದ 'ತೌರಾತ್', ಪ್ರವಾದಿ ದಾವೂದರಿಗೆ ನೀಡಿದ ಝುಬೂರ್, ಪ್ರವಾದಿ ಈಸಾರಿಗೆ(ಅ) ನೀಡಿದ 'ಇಂಜೀಲ್' ಹಾಗೂ ಕೊನೆಯದಾಗಿ ಪ್ರವಾದಿ ಮುಹಮ್ಮದರಿಗೆ(ಸ) ನೀಡಿದ 'ಕುರ್‌ಆನ್'. ಪ್ರವಾದಿ ಇಬ್ರಾಹೀಮರಿಗೆ(ಅ) ನೀಡಿದ ಕಡತ ಗಳ ಬಗ್ಗೆಯೂ ಕುರ್‌ಆನಿನಲ್ಲಿ ಹೇಳಿದೆ. ಅವುಗಳನ್ನು 'ಸುಹ್‌ಫ್ ಇಬ್ರಾಹೀಮ್' ಎಂದು ಕರೆಯಲಾಗುತ್ತದೆ.

ಈ ಎಲ್ಲ ಗ್ರಂಥಗಳೂ ಸತ್ಯವಾಗಿವೆ ಮತ್ತು ಅವುಗಳನ್ನು ಅಲ್ಲಾಹ್ ಅವತೀರ್ಣ ಗೊಳಿಸಿರುವನೆಂದು ನಾವು ವಿಶ್ವಾಸವಿರಿಸಬೇಕು.

## ಅಭ್ಯಾಸ

1. ಅಲ್ಲಾಹನ ಗ್ರಂಥಗಳೆಂದರೇನು?
2. ಅಲ್ಲಾಹನು ಗ್ರಂಥಗಳನ್ನು ಯಾಕೆ ಅವತೀರ್ಣಗೊಳಿಸಿದನು?
3. ದೇವಗ್ರಂಥಗಳ ನಿಯಮಗಳಲ್ಲಿ ವ್ಯತ್ಯಾಸಗಳಿರಲು ಕಾರಣವೇನು?
4. ದೇವಗ್ರಂಥಗಳ ಮೂಲ ವಿಷಯಗಳಲ್ಲಿ ವ್ಯತ್ಯಾಸವಿರಬಹುದೇ?
5. ಖ್ಯಾತ ದೇವಗ್ರಂಥಗಳು ಯಾವುವು? ಅವು ಯಾರಿಗೆ ಅವತೀರ್ಣಗೊಂಡಿವೆ?



# 5

# ಪೂರ್ವ ದೇವಗ್ರಂಥ

ಕುರ್‌ಆನ್ ಅವತೀರ್ಣವಾಗುವುದಕ್ಕಿಂತ ಮುಂಚೆ ಅನೇಕ ಗ್ರಂಥಗಳು ಅವತೀರ್ಣಗೊಂಡಿವೆಯೆಂದು ನಾವು ತಿಳಿದಿದ್ದೇವೆ. ಅವುಗಳನ್ನು ಪೂರ್ವ ಗ್ರಂಥಗಳೆನ್ನಲಾಗುತ್ತದೆ. ಅವುಗಳಲ್ಲಿ ನಾವು ವಿಶ್ವಾಸವಿರಿಸಬೇಕು. ಆದರೆ ಅವು ಸಾರ್ವಕಾಲಿಕ ಗ್ರಂಥಗಳಾಗಿರಲಿಲ್ಲ. ಅವು ಆಯಾ ಕಾಲಕ್ಕೆ ಸೀಮಿತವಾಗಿದ್ದುವು. ಪ್ರತಿಯೊಂದು ಗ್ರಂಥವೂ ಆಯಾ ಕಾಲದ ಜನರಿಗೆ ಬೇಕಾದ ನಿಯಮಗಳನ್ನು ಕಲಿಸಿತ್ತು. ಆದ್ದರಿಂದ ಕುರ್‌ಆನಿಗಿಂತ ಮುಂಚೆ ಅವತೀರ್ಣಗೊಂಡ ಗ್ರಂಥಗಳು ಯಥಾವತ್ತಾಗಿ ಉಳಿಯಲಿಲ್ಲ. ಕುರ್‌ಆನಿನ ಅವತೀರ್ಣದಿಂದ ಅವು ಅಸಿಂಧುವಾದುವು. ಕುರ್‌ಆನ್ ಕೊನೆಯ ಗ್ರಂಥವಾಗಿದೆ. ಅದು ಸಂಪೂರ್ಣವಾಗಿದೆ. ಲೋಕಾವಸಾನದವರೆಗೆ ಮಾನವನಿಗೆ ಅಗತ್ಯವಿರುವ ಎಲ್ಲ ನಿಯಮಗಳ ಮಾರ್ಗದರ್ಶನ ಆ ಗ್ರಂಥದಲ್ಲಿದೆ. ಆದ್ದರಿಂದ ಕುರ್‌ಆನಿನ ಬಳಿಕ ಇತರ ಗ್ರಂಥಗಳ ಅವಶ್ಯಕತೆ ಉಳಿಯಲಿಲ್ಲ.

ಕುರ್‌ಆನಿನಲ್ಲಿ ಹೆಸರೆತ್ತಿ ಹೇಳಿದ ಪೂರ್ವ ಗ್ರಂಥಗಳಿಗೂ ಇಂದು ಸ್ಥಾನವಿಲ್ಲ. ಇದನ್ನು ಕುರ್‌ಆನ್ ಸ್ವತಃ ತಿಳಿಸಿದೆ. 'ಸುಹ್‌ಫ್ ಇಬ್ರಾಹೀಮ್' (ಪ್ರವಾದಿ ಇಬ್ರಾಹೀಮರ ಕಡತಗಳು) ಈಗ ಸಂಪೂರ್ಣ ಕಳೆದು ಹೋಗಿವೆ. ಇತರ ಗ್ರಂಥಗಳೂ ಅವುಗಳ ನೈಜ ರೂಪದಲ್ಲಿ ಉಳಿದಿಲ್ಲ.

ಆ ಗ್ರಂಥಗಳನ್ನು ಸಂಬಂಧಿತ ಪ್ರವಾದಿಗಳ ಕಾಲಾನಂತರ ಬರೆದಿರಿಸಲಾಯಿತು. ಆ ವೇಳೆಗೆ ಜನರು ಪ್ರವಾದಿಗಳ ವಚನಗಳನ್ನು ಮರೆಯಲಾರಂಭಿಸಿದ್ದರು. ಅನಂತರ ಊಹೆ ಮತ್ತು ನೆನಪಿನ ಆಧಾರದಲ್ಲಿ ಅವುಗಳನ್ನು ಬರೆದಿಡಲಾಯಿತು. ಅದರಿಂದಾಗಿ ದೇವವಚನಗಳೊಂದಿಗೆ ಮಾನವರ ವಚನಗಳೂ ಸೇರಿಕೊಂಡುವು. ಅವುಗಳನ್ನು ಇಂದು ಪ್ರತ್ಯೇಕಿಸಿ ತಿಳಿಯಲು ಸಾಧ್ಯವಿಲ್ಲ.

ಎಲ್ಲ ದೇವಗ್ರಂಥಗಳೂ ಏಕದೇವವಿಶ್ವಾಸವನ್ನೇ ಕಲಿಸಿದ್ದುವು. ಆದರೆ ಇಂದು ರೂಢಿಯಲ್ಲಿರುವ ಪೂರ್ವಗ್ರಂಥಗಳಲ್ಲಿ ಬಹುದೇವ ವಿಶ್ವಾಸ ಸೇರಿಕೊಂಡಿದೆ. ಪ್ರವಾದಿ ಈಸಾರನ್ನು(ಅ) ದೇವಪುತ್ರನೆಂದು ನಂಬುವುದು ಬಹುದೇವ ವಿಶ್ವಾಸವೇ ಆಗಿದೆ. ಹಾಗೆಯೇ ಅಲ್ಲಾಹ್ ಮತ್ತು ಪ್ರವಾದಿಗಳ ಬಗ್ಗೆಯೂ ಅವುಗಳಲ್ಲಿ ಹಲವು ದೋಷಪೂರ್ಣ ವಿಷಯಗಳನ್ನು ನಾವು ಕಾಣಬಹುದು. ಆದ್ದರಿಂದ ಅವುಗಳಲ್ಲಿ ಹಸ್ತಕ್ಷೇಪ ನಡೆದಿರುವುದು ಸ್ಪಷ್ಟ. ಬೈಬಲ್‌ನ ಹಳೆಯ ಒಡಂಬಡಿಕೆ(ತೌರಾತ್) ಮತ್ತು ಹೊಸ ಒಡಂಬಡಿಕೆ (ಇಂಜೀಲ್)ಗಳಲ್ಲಿ ಅನೇಕ ಲೋಪದೋಷಗಳಿವೆಯೆಂದು ಬೈಬಲ್ ವಿದ್ವಾಂಸರೇ ಒಪ್ಪಿದ್ದಾರೆ.

ಈ ಕಾರಣಗಳಿಂದಾಗಿ ಪೂರ್ವಗ್ರಂಥಗಳೆಂಬ ಹೆಸರಲ್ಲಿ ಇಂದು ರೂಢಿಯಲ್ಲಿರುವವುಗಳನ್ನು ಯಥಾವತ್ತಾಗಿ ಅಲ್ಲಾಹನ ಗ್ರಂಥಗಳೆಂದು ವಿಶ್ವಾಸವಿರಿಸಬಾರದು. ದೇವಗ್ರಂಥಗಳ ಪೈಕಿ ಕುರ್‌ಆನ್ ಮಾತ್ರ ಈಗ ಮೂಲರೂಪದಲ್ಲಿ ಉಳಿದಿದೆ.

## ಅಭ್ಯಾಸ

1. ಪೂರ್ವಗ್ರಂಥಗಳೆಂದು ಯಾವುದಕ್ಕೆ ಹೇಳಲಾಗುತ್ತದೆ?
2. ಕುರ್‌ಆನಿನ ಅವತೀರ್ಣದಿಂದ ಎಲ್ಲ ಪೂರ್ವಗ್ರಂಥಗಳೂ ಅಸಿಂಧುವಾದುವು. ಯಾಕೆ?
3. ಎಲ್ಲ ದೇವಗ್ರಂಥಗಳೂ........... ಕಲಿಸಿದ್ದುವು.
4. ದೇವವಚನಗಳಲ್ಲಿ ಮಾನವ ವಚನಗಳು ಸೇರಲು ಕಾರಣವೇನು?



# 6.

# ಪವಿತ್ರ ಕುರ್‌ಆನ್

ಪವಿತ್ರ ಕುರ್‌ಆನ್ ಅಲ್ಲಾಹನ ಕೊನೆಯ ಗ್ರಂಥ. ಪ್ರವಾದಿ ಮುಹಮ್ಮದ್(ಸ) ಅದನ್ನು ತಂದಿದ್ದಾರೆ. ಪ್ರವಾದಿವರ್ಯರು(ಸ) ಎಂದಿನಂತೆಯೇ ಹಿರಾ ಗುಹೆಯಲ್ಲಿ ಒಂಟಿಯಾಗಿ ಅಲ್ಲಾಹನನ್ನು ಧ್ಯಾನಿಸುತ್ತಿದ್ದರು. ಜಿಬ್ರೀಲ್(ಅ) ಅಲ್ಲಿ ಪ್ರತ್ಯಕ್ಷವಾಗಿ ಮುಹಮ್ಮದ್(ಸ) ಅವರಿಗೆ ಆಜ್ಞಾಪಿಸಿದರು. 'ಇಕ್ರಅ್' (ಓದಿರಿ), ಹೆದರಿ ನಡುಗುತ್ತ ಪ್ರವಾದಿಯವರು(ಸ) ಹೇಳಿದರು: "ನನಗೆ ಓದುಬಾರದು."

ಕೂಡಲೇ ಜಿಬ್ರೀಲ್(ಅ) ಪ್ರವಾದಿಯವರನ್ನು(ಸ) ಬಿಗಿದಪ್ಪಿ ಅದೇ ಆಜ್ಞೆಯನ್ನು ಪುನರಾವರ್ತಿಸಿದರು. ಪ್ರವಾದಿಯವರು(ಸ) ಮೊದಲಿನ ಉತ್ತರವನ್ನೇ ನೀಡಿದರು. ಮೂರು ಬಾರಿ ಹೀಗೆಯೇ ಆಯಿತು. ಅನಂತರ ಜಿಬ್ರೀಲ್(ಅ) ಪ್ರವಾದಿ ಯವರಿಗೆ(ಸ) ಹೀಗೆ ಓದಿ ಹೇಳಿದರು.

اِقْرَاْ بِاسْمِ رَبِّكَ الَّذِىْ خَلَقَ ۝١ خَلَقَ الْاِنْسَانَ مِنْ عَلَقٍ ۝٢ اِقْرَاْ وَرَبُّكَ الْاَكْرَمُ ۝٣
الَّذِىْ عَلَّمَ بِالْقَلَمِ ۝٤ عَلَّمَ الْاِنْسَانَ مَا لَمْ يَعْلَمْ ۝٥

"(ಸಂದೇಶವಾಹಕರೇ) ಓದಿರಿ. ನಿಮ್ಮನ್ನು ಸೃಷ್ಟಿಸಿದ ನಿಮ್ಮ ಪ್ರಭುವಿನ ನಾಮದೊಂದಿಗೆ ಅವನು ಹೆಪ್ಪುಗಟ್ಟಿದ ರಕ್ತದ ಒಂದು ಪಿಂಡದಿಂದ ಮಾನವನನ್ನು ಸೃಷ್ಟಿಸಿದನು. ಓದಿರಿ, ನಿಮ್ಮ ಪ್ರಭು ಮಹಾ ಉದಾರಿ. ಅವನು ಲೇಖನಿಯ ಮೂಲಕ ವಿದ್ಯೆ ಕಲಿಸಿದನು. ಮಾನವನು ತಿಳಿದಿರದಂತಹ ಜ್ಞಾನವನ್ನು ಅವನಿಗೆ ದಯಪಾಲಿಸಿದನು."

ಇದು ಕುರ್‌ಆನಿನ ಅವತೀರ್ಣದ ಆರಂಭವಾಗಿತ್ತು. ಆ ಬಳಿಕ ಹಲವು ಸಂದರ್ಭಗಳಲ್ಲಿ ಕುರ್‌ಆನಿನ ಆಯತ್(ವಾಕ್ಯ) ಮತ್ತು ಸೂರಃ(ಅಧ್ಯಾಯ)ಗಳು ಪ್ರವಾದಿಯವರಿಗೆ(ಸ) ಅವತೀರ್ಣವಾಗುತ್ತಿದ್ದವು. 23 ವರ್ಷಗಳಲ್ಲಿ ಅದರ ಅವತೀರ್ಣ ಪೂರ್ಣಗೊಂಡಿತು. ಹೀಗೆ ಅವತೀರ್ಣಗೊಂಡ ದೇವವಚನಗಳ ಸಂಕಲನವೇ ಪವಿತ್ರ ಕುರ್‌ಆನ್.

ಪೂರ್ವಗ್ರಂಥಗಳು ಮತ್ತು ಪವಿತ್ರ ಕುರ್‌ಆನ್ ಒಂದೇ ಧ್ಯೇಯಕ್ಕಾಗಿ ಅವತೀರ್ಣ ಗೊಂಡಿದ್ದುವು. ಆದರೆ ಕುರ್‌ಆನ್ ಮತ್ತು ಆ ಗ್ರಂಥಗಳಲ್ಲಿ ಹಲವು ಪ್ರಮುಖ ವ್ಯತ್ಯಾಸ ಗಳಿವೆ:

1. ಕುರ್‌ಆನ್ ಎಲ್ಲ ಕಾಲ ಮತ್ತು ಎಲ್ಲ ಸಮುದಾಯಗಳಿಗಾಗಿ ಅವತೀರ್ಣ ಗೊಂಡಿದೆ. ಪೂರ್ವಗ್ರಂಥಗಳು ನಿರ್ದಿಷ್ಟ ಕಾಲ ಮತ್ತು ಸಮುದಾಯಗಳಿಗೆ ಸೀಮಿತವಾಗಿದ್ದುವು.

2. ಪವಿತ್ರ ಕುರ್‌ಆನ್ ಕೊನೆಯ ದೇವಗ್ರಂಥವಾಗಿದೆ. ಆದ್ದರಿಂದ ಕುರ್‌ಆನಿನ ಬಳಿಕ ಬೇರೊಂದು ದೇವಗ್ರಂಥದ ಆವಶ್ಯಕತೆಯಿಲ್ಲ.

3. ಕುರ್‌ಆನ್ ಇಂದಿಗೂ ಸುರಕ್ಷಿತವಾಗಿದೆ. ಅಲ್ಲಾಹನು ಪ್ರವಾದಿ ಯವರಿಗೆ(ಸ) ತಲುಪಿಸಿದ ರೂಪದಲ್ಲಿಯೇ ಅದು ಉಳಿದುಕೊಂಡಿದೆ. ಆದರೆ ಪೂರ್ವ ಗ್ರಂಥಗಳು ಅದರ ನೈಜ ರೂಪದಲ್ಲಿ ಉಳಿದಿಲ್ಲ.

ಇಂದು ಎಲ್ಲ ಮಾನವರೂ ಕುರ್‌ಆನ್ ಕಲಿಸುವ ಪ್ರಕಾರ ಜೀವಿಸಬೇಕಾಗಿದೆ. ಅದು ಅತ್ಯುತ್ತಮ ಮಾರ್ಗವನ್ನು ತೋರಿಸಿಕೊಡುತ್ತದೆ. ಅದನ್ನು ಅನುಸರಿಸಿ ಬಾಳುವವರಿಗೆ ಪರ ಲೋಕದಲ್ಲಿ ಸ್ವರ್ಗ ದೊರೆಯುತ್ತದೆ. ಅನುಸರಿಸದವರು ಕಷ್ಟನಷ್ಟಗಳಿಗೆ ಗುರಿಯಾಗುತ್ತಾರೆ. ಪರಲೋಕದಲ್ಲಿ ಕಠೋರ ಶಿಕ್ಷೆಯನ್ನು ಅನುಭವಿಸಬೇಕಾಗುವುದು.

ಮಾನವ ಕಲ್ಯಾಣಕ್ಕೆ ಅಗತ್ಯವಿರುವ ನಿಯಮ ನಿಬಂಧನೆಗಳನ್ನು ಕಲಿಸುವ ಕುರ್‌ಆನಿಗೆ ಸಾಟಿಯಾದ ಬೇರೊಂದು ಗ್ರಂಥ ಜಗತ್ತಿನಲ್ಲಿಲ್ಲ. ಅದರಲ್ಲಿ ವಿಶ್ವಾಸಕ್ಕೆ ಸಂಬಂಧಿಸಿದ ವಿಷಯಗಳಿವೆ. ಆಚಾರ ಕರ್ಮಗಳಿವೆ. ಮಾನವರ ಪರಸ್ಪರ ವ್ಯವಹಾರ ನೀತಿಗಳಿವೆ. ಕುಟುಂಬ ಸಂಬಂಧ ಮತ್ತು ಆರ್ಥಿಕ ವಹಿವಾಟಿನ ನಿರ್ದೇಶಗಳಿವೆ. ಕುರ್‌ಆನ್ ನೀತಿ ನ್ಯಾಯವನ್ನೂ ಆಡಳಿತ ಕ್ರಮವನ್ನೂ ಕಲಿಸುತ್ತದೆ. ಅದರಲ್ಲಿ ಗತ ಪ್ರವಾದಿಗಳ ಮತ್ತು ಸಮುದಾಯಗಳ ಚರಿತ್ರೆ ಇದೆ. ಜೀವನವನ್ನು ಉತ್ತಮಪಡಿಸುವ ಸಾರೋಪದೇಶಗಳಿವೆ. ಇಂತಹ ಒಂದು ಗ್ರಂಥವನ್ನು ರಚಿಸಲು ಮಾನವನಿಗೆ ಸಾಧ್ಯವಿಲ್ಲ. ಅದು ಅಲ್ಲಾಹನಿಂದ ಮಾತ್ರ ಸಾಧ್ಯ.

ಕುರ್‌ಆನ್, ಕಲಿಯಲು ಬಹಳ ಸುಲಭವಾದ ಗ್ರಂಥವಾಗಿದೆ. ಅದು ಶುದ್ಧ ಅರಬೀ ಭಾಷೆಯಲ್ಲಿದೆ.

ಕುರ್‌ಆನಿನಲ್ಲಿ ಒಟ್ಟು 114 ಅಧ್ಯಾಯಗಳಿವೆ. ಅದನ್ನು 30 ಕಾಂಡ(ಜುಝ್ಉ) ಗಳಲ್ಲಿ ವಿಂಗಡಿಸಲಾಗಿದೆ.

ಕುರ್‌ಆನ್ ನಮ್ಮ ಮಾರ್ಗದರ್ಶಿಯಾಗಿರಬೇಕು. ನಾವು ಅದನ್ನು ಅನುಸರಿಸಿ ಬಾಳಬೇಕು.

## ಅಭ್ಯಾಸ

1. ಕೊನೆಯ ಗ್ರಂಥ ಯಾವುದು? ಅದು ಯಾರಿಗೆ ದೊರೆಯಿತು?
2. ಪ್ರವಾದಿಯವರಿಗೆ(ಸ) ಮೊದಲು ಅವತೀರ್ಣಗೊಂಡ ಕುರ್‌ಆನಿನ ಆಯತ್‌ಗಳನ್ನು ಹೇಳಿರಿ.
3. ಕುರ್‌ಆನ್ ಮತ್ತು ಇತರ ಗ್ರಂಥಗಳ ಕೆಲವು ವ್ಯತ್ಯಾಸಗಳನ್ನು ತಿಳಿಸಿರಿ.
4. ಕುರ್‌ಆನಿನಂತೆ ಬಾಳುವುದರಿಂದ ಲಾಭವೇನು?
5. ಕುರ್‌ಆನಿನಲ್ಲಿ................. ಅಧ್ಯಾಯಗಳು ಮತ್ತು ............ ಕಾಂಡಗಳಿವೆ.
6. ಕುರ್‌ಆನಿನಲ್ಲಿ ಪ್ರತಿಪಾದಿಸಿರುವ ಕೆಲವು ವಿಷಯಗಳನ್ನು ತಿಳಿಸಿರಿ.



# 7

# ಪ್ರವಾದಿಗಳು

ಪ್ರವಾದಿಗಳಲ್ಲಿರುವ ವಿಶ್ವಾಸವು ನಾಲ್ಕನೆಯ ವಿಷಯವಾಗಿದೆ. ಜಗತ್ತಿನಲ್ಲಿ ಅನೇಕ ಪ್ರವಾದಿಗಳು ಆಗಿ ಹೋಗಿದ್ದಾರೆ. ಜನರಿಗೆ ಇಸ್ಲಾಮ್ ಧರ್ಮವನ್ನು ಕಲಿಸಲಿಕ್ಕಾಗಿ ಅಲ್ಲಾಹನು ಅವರನ್ನು ನೇಮಿಸಿದ್ದನು. ಅವನು ಅವರಿಗೆ 'ವಹ್ಯ್' ಅಥವಾ ದಿವ್ಯ ಸಂದೇಶ ನೀಡಿದನು.

ಎಲ್ಲ ಪ್ರವಾದಿಗಳೂ ಅವರಿಗಿಂತ ಮುಂಚೆ ಬಂದ ಪ್ರವಾದಿಗಳನ್ನು ಅಂಗೀಕರಿಸಿದ್ದರು. ಅವರ ಬೋಧನೆಗಳನ್ನು ಪುಷ್ಟೀಕರಿಸಿದ್ದರು. ಕೊನೆಯದಾಗಿ ಪ್ರವಾದಿ ಮುಹಮ್ಮದ್(ಸ) ಆಗಮಿಸಿದರು. ಪೂರ್ವ ಪ್ರವಾದಿಗಳೆಲ್ಲರೂ ಸತ್ಯವಂತರಾಗಿದ್ದ ರೆಂದು ಪ್ರವಾದಿ(ಸ) ಕಲಿಸಿದರು.

ಪ್ರವಾದಿ ಪರಂಪರೆಯ ಕುರಿತು ಪ್ರವಾದಿ ಮುಹಮ್ಮದ್(ಸ) ಒಮ್ಮೆ ಹೀಗೆ ಹೇಳಿದ್ದರು. ನಾನು ಮತ್ತು ಇತರ ಪ್ರವಾದಿಗಳು ಒಂದು ಮನೆಯಂತೆ, ಆ ಮನೆಗೆ ಒಂದು ಇಟ್ಟಿಗೆಯ ಜಾಗವನ್ನು ತುಂಬಿಸಿ ಪೂರ್ಣಗೊಳಿಸಬೇಕಾಗಿತ್ತು. ಆ ಇಟ್ಟಿಗೆಯೇ ನಾನು. ನನ್ನ ಆಗಮನದಿಂದ ಆ ಮನೆ ಪೂರ್ಣಗೊಂಡಿತು.

ಒಟ್ಟಿನಲ್ಲಿ ಅಲ್ಲಾಹನು ಕಳುಹಿಸಿದ ಎಲ್ಲ ಪ್ರವಾದಿಗಳಲ್ಲಿಯೂ ವಿಶ್ವಾಸವಿರಿಸಬೇಕು. ಏಕೆಂದರೆ, ಒಬ್ಬರನ್ನು ನಿರಾಕರಿಸಿದರೆ ಎಲ್ಲರನ್ನೂ ನಿರಾಕರಿಸದಂತಾಗುವುದು. ಹತ್ತು ಮಂದಿ ಒಂದೇ ಸತ್ಯವನ್ನು ವಿವಿಧ ಸಂದರ್ಭಗಳಲ್ಲಿ ಹೇಳುತ್ತಾರೆಂದು ಭಾವಿಸೋಣ. ಆ ಪೈಕಿ ಒಬ್ಬರು ಹೇಳಿದ್ದು ಸತ್ಯವೆಂದು ಒಪ್ಪಿದರೆ ಇತರರೂ ಹೇಳಿದನ್ನೂ ಸತ್ಯವೆಂದು ಒಪ್ಪ ಬೇಕಾಗುತ್ತದೆ.

ಎಲ್ಲ ಪ್ರವಾದಿಗಳಲ್ಲಿಯೂ ವಿಶ್ವಾಸವಿರಿಸಬೇಕೆಂದು ಈಗಾಗಲೇ ಹೇಳಿದೆ. ಹಾಗಿದ್ದರೂ ಆ ಪೈಕಿ ಯಾರಾದರೂ ಒಬ್ಬರನ್ನು ಅನುಸರಿಸಿ ಬಾಳಿದರೆ ಸರಿಯಾಗುವುದಿಲ್ಲ. ಗತ ಪ್ರವಾದಿಗಳೆಲ್ಲರೂ ಅವರವರ ಕಾಲಗಳ ಮಾರ್ಗದರ್ಶಕರಾಗಿದ್ದರು. ಆಯಾ ಕಾಲದ ಜನರಿಗೆ ಆಗತ್ಯವಿರುವ ನಿಯಮ ನಿಬಂಧನೆಗಳನ್ನು ಅವರು ನೀಡಿದ್ದರು. ಆದ್ದರಿಂದ ಅಲ್ಲಾಹನು ಪ್ರತಿಯೊಬ್ಬ ಪ್ರವಾದಿಯ ಬಳಿಕ ಪುನಃ ಪ್ರವಾದಿಗಳನ್ನು ಕಳುಹಿಸುತ್ತಲಿದ್ದನು.

ಆದರೆ ಮುಹಮ್ಮದ್(ಸ) ಕೊನೆಯ ಪ್ರವಾದಿಯಾಗಿದ್ದಾರೆ. ಅವರನ್ನು ಅವರ ಕಾಲದ ಜನರಿಗಾಗಿ ಮಾತ್ರ ನೇಮಿಸಿದ್ದಲ್ಲ, ಎಲ್ಲ ಕಾಲಗಳ ಎಲ್ಲ ಜನರಿಗಾಗಿ ನೇಮಿಸಲಾಗಿದೆ.

ಪ್ರವಾದಿವರ್ಯರ(ಸ) ಮೂಲಕ ಅಲ್ಲಾಹನು ಇಸ್ಲಾಮ್ ಧರ್ಮವನ್ನು ಪೂರ್ಣಗೊಳಿಸಿದನು. ಅವರ ಬಳಿಕ ಇನ್ನೋರ್ವ ಪ್ರವಾದಿ ಬರುವುದಿಲ್ಲ.

ಹಿಂದಿನ ಯಾರಾದರೊಬ್ಬ ಪ್ರವಾದಿಯನ್ನು ಅನುಸರಿಸಬಹುದೆಂದು ಭಾವಿಸಿದರೂ ಇಂದು ಅದು ಸಾಧ್ಯವಿಲ್ಲ, ಏಕೆಂದರೆ, ಅವರ ಜೀವನಕ್ರಮ ಮತ್ತು ಆದೇಶಗಳು ಇಂದು ಯಥಾರೂಪದಲ್ಲಿ ಉಳಿದಿಲ್ಲ. ಆದರೆ ಪ್ರವಾದಿಯವರ(ಸ) ಸ್ಥಿತಿ ಹಾಗಲ್ಲ. ಅವರ ಜೀವನರೀತಿ ಮತ್ತು ಉಪದೇಶಗಳು ಇಂದಿಗೂ ಸುರಕ್ಷಿತವಾಗಿವೆ.

ಆದ್ದರಿಂದ ಎಲ್ಲ ಮಾನವರೂ ಪ್ರವಾದಿಯವರನ್ನು(ಸ) ಅನುಸರಿಸಿ ಬಾಳಬೇಕಾಗಿದೆ. ಅದಕ್ಕಾಗಿ ಮುಹಮ್ಮದರ(ಸ) ಪ್ರವಾದಿತ್ವದಲ್ಲಿ ದೃಢ ವಿಶ್ವಾಸವಿರಿಸಬೇಕಾಗಿದೆ. ಮುಹಮ್ಮದ್‌ರು(ಸ) ಅಲ್ಲಾಹನ ಅಂತ್ಯ ಪ್ರವಾದಿಯೆಂದು ವಿಶ್ವಾಸವಿರಿಸಬೇಕು. ಅವರು ಕಲಿಸಿದ ವಿಷಯಗಳು ಸತ್ಯ, ಸಂಪೂರ್ಣ ಮತ್ತು ಸಮಗ್ರ ವೆಂದು ವಿಶ್ವಾಸವಿರಿಸಬೇಕು.

ಜಗತ್ತಿಗೆ ಹಲವು ಸಹಸ್ರ ಪ್ರವಾದಿಗಳು ಆಗಮಿಸಿರುವರೆಂದು ಮುಹಮ್ಮದ್(ಸ) ಹೇಳಿದ್ದಾರೆ. ಅವರು ಯಾರೆಂದು ನಮಗೆ ತಿಳಿದಿಲ್ಲ. ಅವರ ಪೈಕಿ ಕೆಲವು ಮಂದಿಯನ್ನು ಮಾತ್ರ ಕುರ್‌ಆನ್ ಪರಿಚಯಪಡಿಸಿದೆ. ಅವರು 25 ಮಂದಿಯಿದ್ದಾರೆ.

| | | |
|---|---|---|
| 1. ಆದಮ್(ಅ) | 10. ಯಾಕೂಬ್(ಅ) | 19. ಇಲ್ಯಾಸ್(ಅ) |
| 2. ಇದ್ರೀಸ್(ಅ) | 11. ಯೂಸುಫ್(ಅ) | 20. ಅಲ್‌ಯಸಅ್(ಅ) |
| 3. ನೂಹ್(ಅ) | 12. ಅಯ್ಯೂಬ್(ಅ) | 21. ಯೂನುಸ್(ಅ) |
| 4. ಹೂದ್(ಅ) | 13. ಶುಐಬ್(ಅ) | 22. ಝಕರಿಯ್ಯಾ(ಅ) |
| 5. ಸಾಲಿಹ್(ಅ) | 14. ಮೂಸಾ(ಅ) | 23. ಯಹ್ಯಾ(ಅ) |
| 6. ಇಬ್ರಾಹೀಮ್(ಅ) | 15. ಹಾರೂನ್(ಅ) | 24. ಈಸಾ(ಅ) |
| 7. ಲೂತ್(ಅ) | 16. ದುಲ್‌ಕಿಫ್ಲ್(ಅ) | 25. ಮುಹಮ್ಮದ್(ಸ) |
| 8. ಇಸ್ಮಾಈಲ್(ಅ) | 17. ದಾವೂದ್(ಅ) | |
| 9. ಇಸ್ಹಾಕ್(ಅ) | 18. ಸುಲೈಮಾನ್(ಅ) | |

## ಅಭ್ಯಾಸ

1. ಅಲ್ಲಾಹನು ಪ್ರವಾದಿಗಳನ್ನು ಯಾಕೆ ಕಳುಹಿಸಿದ್ದನು?
2. ಪ್ರವಾದಿ ಪರಂಪರೆಯನ್ನು ಮುಹಮ್ಮದ್(ಸ) ಯಾವುದಕ್ಕೆ ಹೋಲಿಸಿದ್ದಾರೆ?
3. ಅಲ್ಲಾಹನು ಕಳುಹಿಸಿದ ಎಲ್ಲ ಪ್ರವಾದಿಗಳಲ್ಲಿಯೂ ವಿಶ್ವಾಸವಿರಿಸಬೇಕು. ಯಾಕೆ?
4. ಎಲ್ಲ ಮಾನವರು ಪ್ರವಾದಿ ಮುಹಮ್ಮದರನ್ನು(ಸ) ಅನುಸರಿಸಿ ಬಾಳಬೇಕು. ಯಾಕೆ?
5. ಕುರ್‌ಆನ್‌ನಲ್ಲಿ ಹೆಸರು ತಿಳಿಸಲಾದ ಪ್ರವಾದಿಗಳು ಯಾರು?



# 8

# ಪ್ರವಾದಿ ಪ್ರೇಮ

ಹಿಜರಿ ನಾಲ್ಕನೆಯ ವರ್ಷ ಮಕ್ಕಾದಲ್ಲಿ ಕುರೈಶರು ಮುಸ್ಲಿಮರ ವಿರುದ್ಧ ಪಿತೂರಿ ನಡೆಸುತ್ತಿದ್ದಾರೆ. ಅವರ ಸಂಚಿನ ವಿವರಗಳನ್ನು ಗುಪ್ತವಾಗಿ ತಿಳಿಯಬೇಕೆಂದು ಪ್ರವಾದಿ(ಸ) ನಿರ್ಧರಿಸಿದರು. ಅದಕ್ಕಾಗಿ ಹತ್ತು ಮಂದಿ ಸಹಾಬಿಗಳ ಒಂದು ತಂಡ ವನ್ನು ನೇಮಿಸಿದರು.

ಆ ತಂಡವು ಮದೀನಾದಿಂದ ಹೊರಟಿತು. ಅವರು ಬಹಳ ಎಚ್ಚರಿಕೆಯಿಂದ ಮುಂದೆ ಸಾಗಿದರು. ಆಗಿದ್ದರೂ ದಾರಿ ಮಧ್ಯದಲ್ಲಿ ಹುದೈಲ್ ಗೋತ್ರದ ವೈರಿಗಳು ಅವರನ್ನು ಸುತ್ತುವರಿದರು. ಸುಮಾರು 200 ಮಂದಿಯಿದ್ದ ವೈರಿ ತಂಡದ ವಿರುದ್ಧ ಅವರು ವೀರಾವೇಶದಿಂದ ಹೋರಾಡಿದರು. ಕೊನೆಗೆ ಅವರಲ್ಲಿ ಎಂಟು ಮಂದಿ ಹುತಾತ್ಮರಾದರು. ಸಹಾಬಿಗಳಾದ ಝೈದ್ ಬಿನ್ ದಸಿನಃ(ರ) (زَيْدُ بْنُ الدَّثِنَةِ) ಮತ್ತು ಖುಬೈಬ್ ಬಿನ್ ಅದಿಯ್ಯ್(ರ) (خُبَيْبُ بْنُ عَدِيٍّ) ಬಂಧಿತರಾದರು. ತರುವಾಯ ಅವರೀರ್ವರನ್ನೂ ಶತ್ರುಗಳು ಕುರೈಶರು ಹುದೈಲ್ ಗೋತ್ರದಿಂದ ಹಿಂದೆ ಕೈದಿಗಳಾಗಿ ಹಿಡಿದಿದ್ದ ಇಬ್ಬರ ಬದಲಿಗೆ ಅವರಿಗೆ ಒಪ್ಪಿಸಿದರು. ಮುಸ್ಲಿಮರೊಂದಿಗೆ ಪ್ರತೀಕಾರ ತೀರಿಸಲಿಕ್ಕಾಗಿ ಅವರೀರ್ವರನ್ನೂ ಕೊಲ್ಲಲು ಕುರೈಶರು ನಿರ್ಧರಿಸಿದರು.

ಹೀಗೆ ಹತ್ಯೆಯ ದಿನ ಬಂತು. ಜನರು ಗುಂಪು ಸೇರಿದರು. ಝೈದ್‌ರನ್ನು(ರ) ಜನರ ಮುಂದೆ ಕರೆ ತರಲಾಯಿತು. ಏಕೆಂದರೆ, ಅಲ್ಲಾಹನ ಮಾರ್ಗದಲ್ಲಿ ಹುತಾತ್ಮನಾಗುವ ಭಾಗ್ಯ ದೊರೆತುದಕ್ಕಾಗಿ ಅವರ ಮುಖವು ಸಂತೋಷದಿಂದ ಪುಳಕಿತವಾಗಿತ್ತು. ಅಲ್ಲಾಹನು ಹುತಾತ್ಮರಿಗೆ ಸ್ವರ್ಗದ ವಾಗ್ದಾನ ನೀಡಿದ್ದಾನೆ. ಅದನ್ನು ಸ್ಮರಿಸಿ ಅವರ ಮುಖ ಪ್ರಸನ್ನವಾಯಿತು.

ವಧಿಸುವ ಸಿದ್ಧತೆ ಆರಂಭವಾಯಿತು. "ಝೈದ್! ನಿನಗೆ ಬದುಕುವ ಆಶೆ ಯಿಲ್ಲವೇ? ನಿನ್ನ ಧರ್ಮವನ್ನು ಕೈಬಿಡು! ನಮ್ಮ ಜತೆ ನೀನು ಸುಖವಾಗಿ ಬಾಳಬಹುದು."– ಕುರೈಶರು ಒತ್ತಾಯಿಸಿದರು.

"ಧರ್ಮವನ್ನು ತೊರೆಯಬೇಕೇ? ಅದಕ್ಕಿಂತ ಸಾವಿರ ಬಾರಿ ಸಾಯುವುದೇ ನನಗೆ ಲೇಸು!" ಝೈದ್(ರ) ಪ್ರತ್ಯುತ್ತರ ನೀಡಿದರು.

ಕೂಡಲೇ ಅಬೂಸುಫ್‌ಯಾನ್ ಕೇಳಿದರು: "ನೀನು ಮನೆಯಲ್ಲಿ ಸುರಕ್ಷಿತವಾಗಿರುತ್ತಾ, ನಿನ್ನ ಬದಲಾಗಿ ಮುಹಮ್ಮದರನ್ನು(ಸ) ವಧಿಸಿದರೆ ನಿನಗೆ ಸಂತೋಷವಾದೀತೇ?"

"ಅಲ್ಲಾಹನಾಣೆ! ನಾನು ಮನೆಯಲ್ಲಿರುತ್ತಾ ಪ್ರವಾದಿಯವರ ಕಾಲಿಗೆ ಒಂದು ಮುಳ್ಳು ಚುಚ್ಚುವುದನ್ನು ನಾನು ಸಹಿಸಲಾರೆ" ಎಂದು ದಿಟ್ಟ ಉತ್ತರ ನೀಡಿದರು.

"ಮುಹಮ್ಮದ್‌ನ ಅನುಯಾಯಿಗಳು ಆತನನ್ನು ಪ್ರೀತಿಸುವಂತೆ, ಯಾರೂ ಇತರರನ್ನು ಪ್ರೀತಿಸುವುದನ್ನು ನಾನು ನೋಡಿಲ್ಲ" ಎಂದು ಅಬೂ ಸುಫ್‌ಯಾನ್ ಹೇಳಿದರು. ಕೊನೆಗೆ ಅವರು ಆ ಸತ್ಯವಿಶ್ವಾಸಿಯನ್ನು ವಧಿಸಿದರು.

ಅಂದು ಸಂಜೆ ಅವರು ಪುನಃ ಒಟ್ಟು ಸೇರಿದರು. ಖುಬೈಬ್‌ರನ್ನು(ರ) ವಧಿಸುವ ಯೋಜನೆ ಹಾಕಿದರು. ಅವರನ್ನು ಗಲ್ಲಿಗೇರಿಸಬೇಕು. ಕಳೇಬರವನ್ನು ಎಲ್ಲರೂ ನೋಡಲಿಕ್ಕಾಗಿ ಗಲ್ಲು ಕಂಬದಲ್ಲಿ ತುಂಬಾ ಸಮಯ ನೇತಾಡಿಸಬೇಕು. ಇದು ಅವರ ಯೋಜನೆಯಾಗಿತ್ತು.

ಖುಬೈಬ್‌ರನ್ನು(ರ) ಮರಕ್ಕೆ ಬಿಗಿದರು. ಉತ್ಬ ಬಿನ್ ಹಾರಿಸ್ (عُتْبَةُ بْنُ حَارِثٍ) ಖಡ್ಗ ಹಿಡಿದು ನಿಂತಿದ್ದಾರೆ. ಅಬೂ ಸುಫ್‌ಯಾನ್ ಕೇಳುತ್ತಾರೆ: ಖುಬೈಬ್! ನಿನ್ನ ಬದಲಿಗೆ ಮುಹಮ್ಮದರನ್ನು ವಧಿಸುವುದನ್ನು ನೀನು ಮೆಚ್ಚುವೆಯಾ? ಝ್ಯೆದ್‌ರೊಡನೆ(ರ) ಕೇಳಿದ ಅದೇ ಪ್ರಶ್ನೆ.

"ಅಲ್ಲಾಹನಾಣೆ! ನನ್ನ ವಿಮೋಚನೆಯ ಬದಲಿಗೆ ಪ್ರವಾದಿಯವರ ಕಾಲಿಗೆ ಒಂದು ಮುಳ್ಳು ಚುಚ್ಚುವುದನ್ನೂ ನಾನು ಇಷ್ಟಪಡುವುದಿಲ್ಲ." ಜತೆಗಾರನ ಅದೇ ಉತ್ತರ. ಹೀಗೆ ಖುಬೈಬ್‌ರನ್ನೂ(ರ) ವಧಿಸಲಾಯಿತು.

ನೋಡಿದಿರಾ! ಅವರ ಪ್ರವಾದಿ ಪ್ರೇಮ! ತಾವು ಸಾಯುವುದು ಖಚಿತವಾಗಿದ್ದರೂ ಪ್ರವಾದಿಯವರ(ಸ) ಕಾಲಿಗೆ ಒಂದು ಮುಳ್ಳು ಚುಚ್ಚಿ ನೋಯಿಸುವುದನ್ನು ಅವರು ಇಷ್ಟಪಡಲಿಲ್ಲ.

ಇನ್ನೊಂದು ಘಟನೆ ಉಹುದ್ ಯುದ್ಧ ಜೋರಾಗಿ ನಡೆಯುತ್ತಿದೆ. ಯುದ್ಧದಲ್ಲಿ ಪ್ರವಾದಿವರ್ಯರು(ಸ) ವಧಿಸಲ್ಪಟ್ಟರೆಂಬ ವದಂತಿ ಎಲ್ಲೆಡೆ ಹಬ್ಬಿದೆ. ಮದೀನಕ್ಕೂ ಆ ಸುದ್ದಿ ತಲುಪಿತು. ಆ ಕೂಡಲೇ ಓರ್ವ ಸಹಾಬಿ ಮಹಿಳೆಯು ಮನೆಯಿಂದ ಹೊರಡುತ್ತಾರೆ. ಪ್ರವಾದಿಯವರ(ಸ) ಹತ್ಯೆಯ ಸುದ್ದಿ ನಿಜವೇ? ದಾರಿಯಲ್ಲಿ ಸಿಕ್ಕಿದವರೊಡನೆ ಅವರು ಒಂದೇ ಸಹನೆ ಕೇಳುತ್ತಿದ್ದರು. ಒಬ್ಬರು ಒಂದೊಂದು ಆಘಾತಕಾರಿ ಸುದ್ದಿಯನ್ನು ಅವರಿಗೆ ತಿಳಿಸಿದರು. ನಿಮ್ಮ ತಂದೆ, ಪತಿ ಮತ್ತು ಪುತ್ರ ಯುದ್ಧದಲ್ಲಿ ಹುತಾತ್ಮರಾಗಿದ್ದಾರೆ.

ಎಂತಹ ದಾರುಣ ವಾರ್ತೆ! ತನ್ನ ಆಶ್ರಯದಾತರಾಗಿದ್ದ ಎಲ್ಲರೂ ಈ ಲೋಕದಿಂದ ಹೋಗಿ ಬಿಟ್ಟಿದ್ದಾರೆ. ಈ ದುರಂತ ಸುದ್ದಿಯನ್ನು ಯಾರಿಂದಲಾದರೂ ಸಹಿಸಲಾದೀತೇ? ಆದರೆ, ಆ ವೀರ ಮಹಿಳೆಯು ಕೇಳುವ ಪ್ರಶ್ನೆಯೇ ಬೇರೆ. ತಂದೆ, ಪತಿ ಅಥವಾ

ಪುತ್ರನ ಸಮಾಚಾರವನ್ನು ನಾನು ನಿಮ್ಮೊಡನೆ ಕೇಳಿಲ್ಲ, ಪ್ರವಾದಿಯವರಿಗೆ ಏನಾಗಿದೆ? ಅದನ್ನು ನನಗೆ ತಿಳಿಸಿರಿ!

"ಪ್ರವಾದಿವರ್ಯರು! ಅಲ್ಲಾಹನ ಅನುಗ್ರಹದಿಂದ ಸುರಕ್ಷಿತರಾಗಿದ್ದಾರೆ" ಎಂದು ಯಾರೋ ಹೇಳಿದರು: ಆದರೂ ಅವರಿಗೆ ನಂಬಲಾಗಲಿಲ್ಲ, ಅವರು ಸೀದಾ ಯುದ್ಧ ರಂಗಕ್ಕೆ ಹೋದರು. ಅಲ್ಲಿ ಪ್ರವಾದಿವರ್ಯರನ್ನು ಕಣ್ಣಾರೆ ನೋಡಿದಾಗ ಸಂತೃಪ್ತಿಯಾಯಿತು. ಅವರು ಹೇಳಿದರು "ಪ್ರವಾದಿಗಳೇ ತಾವು ಬದುಕಿರುವಿರಾದರೆ ಇತರೆಲ್ಲ ದುರಂತವೂ ನನ್ನ ಪಾಲಿಗೆ ನಗಣ್ಯ."

ಎಂತಹ ಪ್ರೀತಿ! ಸ್ವಂತ ಪ್ರಾಣ, ತಂದೆ-ತಾಯಿ, ಮಕ್ಕಳು, ಸಂಪತ್ತು ಎಲ್ಲವೂ ಗೌಣ. ಪ್ರವಾದಿಯವರನ್ನು(ಸ) ನಾವು ಈ ರೀತಿಯಲ್ಲಿ ಪ್ರೀತಿಸಬೇಕು.

ನೀವು ಸ್ವಲ್ಪ ಆಲೋಚಿಸಿ ನೋಡಿರಿ! ಒಬ್ಬರು ಕತ್ತಲೆಯಲ್ಲಿ ಪರದಾಡುತ್ತಿದ್ದಾರೆ. ಬೆಳಕು ದೊರೆಯದಿದ್ದರೆ ಅವರು ಆಳವಾದ ಕಂದರಕ್ಕೆ ಬಿದ್ದು ಸಾಯಲಿದ್ದಾರೆ. ಆಗ ಬೆಳಕು ತೋರಿಸಿ ಆ ಅಪಾಯದಿಂದ ಪಾರುಗೊಳಿಸುವವರೊಡನೆ ಅವರಿಗೆ ಎಂತಹ ಪ್ರೀತಿ ಮೂಡಬಹುದು! ಪ್ರವಾದಿಯವರೂ(ಸ) ಅಷ್ಟೆ, ಮಾನವರು ಸನ್ಮಾರ್ಗ ಕಾಣದೆ ನರಕದತ್ತ ಸಾಗುತ್ತಿದ್ದಾರೆ. ಆಗ ಪ್ರವಾದಿಯವರು(ಸ) ಬೆಳಕು ತೋರಿಸಿ ಅವರನ್ನು ರಕ್ಷಿಸಿದರು. ಅದಕ್ಕಾಗಿ ಸ್ವತಃ ಬಹಳಷ್ಟು ಕಷ್ಟ ನಷ್ಟಗಳನ್ನು ಅನುಭವಿಸಿದರು! ಆ ಕರುಣಾಳು ಪ್ರವಾದಿಯವರನ್ನು(ಸ) ಪ್ರೀತಿಸದಿರಲು ನಮಗೆ ಸಾಧ್ಯವೇ! ಆ ಪ್ರೀತಿಗಾಗಿ ನಮಗೆ ಪ್ರಿಯವಾದ ಇತರೆಲ್ಲವನ್ನೂ ತ್ಯಾಗ ಮಾಡಲು ನಮಗೆ ಸಾಧ್ಯವಾಗಬೇಕು. ಆಗ ಮಾತ್ರ ನಾವು ಆ ಮಾರ್ಗದರ್ಶಕರ ನಿಷ್ಠಾವಂತ ಅನುಯಾಯಿಗಳಾಗಬಹುದು. ಇದು ಸತ್ಯವಿಶ್ವಾಸದ ಬೇಡಿಕೆಯಾಗಿದೆ. ಪ್ರವಾದಿ(ಸ) ಹೀಗೆ ಹೇಳಿದ್ದಾರೆ:

لَا يُؤْمِنُ اَحَدُكُمْ حَتّٰى اَكُونَ اَحَبَّ اِلَيْهِ مِنْ
وَالِدِهٖ وَوَلَدِهٖ وَالنَّاسِ اَجْمَعِينَ

"ಸ್ವಂತ ತಂದೆ ತಾಯಂದಿರು ಮತ್ತು ಮಕ್ಕಳು ಹಾಗೂ ಇತರೆಲ್ಲ ಜನರಿಗಿಂತ ನನ್ನನ್ನು ಪ್ರೀತಿಸದಿರುವ ತನಕ ನೀವು ಯಾರೂ ಸತ್ಯವಿಶ್ವಾಸಿಗಳಾಗಲಾರಿರಿ."

ಆದರೆ, ಪ್ರವಾದಿಯವರನ್ನು ಪ್ರೀತಿಸುವುದೆಂದರೆ, ಕೇವಲ ಅವರ ದೇಹವನ್ನು ಪ್ರೀತಿಸುವುದಲ್ಲ ಅಥವಾ ಅವರು ಪ್ರೀತಿಸಿದವರನ್ನು ಮಾತ್ರ ಪ್ರೀತಿಸುವುದಲ್ಲ, ಅವರು ತೋರಿಸಿದ ಸನ್ಮಾರ್ಗವನ್ನು ಪ್ರೀತಿಸುವುದೇ ನಿಜವಾದ ಪ್ರೀತಿಯಾಗಿದೆ. ಅರ್ಥಾತ್, ಪವಿತ್ರ ಕುರ್‌ಆನ್ ಮತ್ತು ಪ್ರವಾದಿಯವರ(ಸ) ಚರ್ಯೆಯನ್ನು ಪ್ರೀತಿಸಬೇಕು. ಅವುಗಳ ಪ್ರಕಾರ ಬಾಳಬೇಕು. ಪ್ರವಾದಿ(ಸ) ಹೇಳಿದ್ದಾರೆ:

تَرَكْتُ فِيكُمْ اَمْرَيْنِ لَنْ تَضِلُّوا مَا تَمَسَّكْتُمْ
بِهِمَا كِتَابُ اللّٰهِ وَسُنَّةُ رَسُولِهِ

"ನಾನು ನಿಮಗೆ ಎರಡು ವಸ್ತುಗಳನ್ನು ಬಿಟ್ಟು ಹೋಗುತ್ತಿದ್ದೇನೆ. ಅವುಗಳನ್ನು ಬಿಗಿ ಹಿಡಿದಿರುವ ತನಕ ನೀವು ದಾರಿ ತಪ್ಪಲಾರಿರಿ. ಅವು ಅಲ್ಲಾಹನ ಗ್ರಂಥ ಮತ್ತು ಆತನ ಪ್ರವಾದಿಯ ಚರ್ಯೆಯಾಗಿದೆ."

ಪ್ರವಾದಿಯವರ(ಸ) ಈ ಚರ್ಯೆ(ಸುನ್ನತ್)ಗಳು ನಮಗೆ ಹದೀಸ್‌ಗಳಲ್ಲಿ ದೊರೆಯುತ್ತದೆ.

## ಅಭ್ಯಾಸ

1. ಕುರೈಶರ ಕುತಂತ್ರಗಳನ್ನು ತಿಳಿಯಲು ಪ್ರವಾದಿಯವರು(ಸ) ಕಳುಹಿಸಿದ 10 ಮಂದಿ ಸಹಾಬಿಗಳ ಪೈಕಿ ಇಬ್ಬರ ಹೆಸರು ತಿಳಿಸಿರಿ.
2. ಸಹಾಬಿಗಳಿಗೆ ಪ್ರವಾದಿ(ಸ) ಅವರೊಡನಿದ್ದ ಪ್ರೀತಿಗೆ ಒಂದು ಉದಾಹರಣೆ ಕೊಡಿರಿ.
3. ಹುದೈಲ್ ಗೋತ್ರದವರು ಬಂಧಿಸಿದ್ದ ಸಹಾಬಿಗಳನ್ನು ಆನಂತರ ಏನು ಮಾಡಿದರು?
4. "ನೀವು ಬದುಕಿದ್ದರೆ ಇತರೆಲ್ಲ ದುರಂತವೂ ನನಗೆ ನಗಣ್ಯ" ಸಂದರ್ಭ ಕೊಟ್ಟು ವಿವರಿಸಿರಿ.
5. ನಾವು ಪ್ರವಾದಿಚರ್ಯೆಯನ್ನು ತಿಳಿಯುವುದು ಹೇಗೆ?

ooo